



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 21

| ಸಂಪುಟ: ೦೩ ಸಂಚಿಕೆ: ೭ | ಅಕ್ಟೋಬರ್ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 03 Issue 7 | October 2016 | Pages - 8 | A. Sub. - Rs. 20/- | Editor : Sri. B.R. Ravindranath |



**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಕೃತಿ–ಚಿತ್ರ –4

## ಉಲ್ಟಾಪಲ್ಟಾ" ಚಲನ ಚಿತ್ರ ಪ್ರದರ್ಶನ

ದಿನಾಂಕ 11–09–2016ರಂದು ಬಿ.ಎಂ.ಶ್ರೀ ಪ್ರತಿಷ್ಠಾನ ಹಮ್ಮಿಕೊಂಡಿದ್ದ ಸಾಹಿತ್ಯಾಧಾರಿತ ಚಲನಚಿತ್ರಗಳ ಪ್ರದರ್ಶನ ಹಾಗೂ ಚರ್ಚೆಯ ನಾಲ್ಕನೆಯ ಕಂತು ಕೃತಿ ಚಿತ್ರ 4ರಲ್ಲಿ ಖ್ಯಾತ ನಿರ್ದೇಶಕ ಶ್ರೀಎನ್.ಎಸ್. ಶಂಕರ್ ಅವರು ನಿರ್ದೇಶಿಸಿರುವ ಷೇಕ್ಸ್ ಪಿಯರ್‌ನ 'ಕಾಮಿಡಿ ಆಫ್ ಎರರ್ಸ್' ಆಧಾರಿತ "ಉಲ್ಟಾಪಲ್ಟಾ" ಚಲನಚಿತ್ರವನ್ನು ಪ್ರದರ್ಶಿಸಲಾಯಿತು. ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ರವೀಂದ್ರನಾಥ ಅವರು ಸ್ವಾಗತ ಕೋರಿದರು. ಪತ್ರಕರ್ತ ಶ್ರೀ ಎನ್.ಎಸ್. ಶ್ರೀಧರಮೂರ್ತಿ ಪ್ರಾಸ್ತಾವಿಕ ನುಡಿಗಳನ್ನು ಆಡಿ ಈ ಮಾಲಿಕೆಯ ಆಶಯವನ್ನು ವಿವರಿಸಿ ಅತಿಥಿಗಳ ಪರಿಚಯ ಮಾಡಿಕೊಟ್ಟರು. ಈ ಚಲನಚಿತ್ರದ ನಿರ್ದೇಶಕರಾದ ಶ್ರೀಎನ್.ಎಸ್. ಶಂಕರ್ ಅವರು ಈ ಚಲನಚಿತ್ರದ ಬಗ್ಗೆ, ಹಾಗೂ ತಮ್ಮ ಚಲನ ಚಿತ್ರ ನಿರ್ದೇಶನ ಹಾಗೂ ನಿರ್ಮಾಣಗಳಿಗೆ ಸಂಬಂಧಿಸಿದಂತೆ ತಮ್ಮ ಅನುಭವಗಳು ಬಗ್ಗೆ ಹಲವು ವಿಚಾರಗಳನ್ನು ವಿವರಿಸಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ ವಂದಾನಾರ್ಪಣೆ ಮಾಡಿದರು.




ತಾಂತ್ರಿಕ ಕಾರಣಗಳಿಂದ ಚಲನ ಚಿತ್ರ ಪ್ರದರ್ಶನದಲ್ಲಿ ತೊಡಕು ಉಂಟಾಗಿ ತಡವಾದ ಕಾರಣದಿಂದ ಚಿತ್ರದ ಬಗ್ಗೆ ಸಂವಾದವನ್ನು ನಡೆಸಲಾಗಲಿಲ್ಲ. ಕಾರ್ಯಕ್ರಮವು ಭೋಜನ ದೊಂದಿಗೆ ಮುಕ್ತಾಯವಾಯಿತು.

ಪ್ರತಿ ತಿಂಗಳ ಎರಡನೇ ಭಾನುವಾರ ಕೃತಿ–ಚಿತ್ರ ಮಾಲೆಯಡಿಯಲ್ಲಿ ಒಂದು ಚಲನಚಿತ್ರವನ್ನು ಪ್ರದರ್ಶಿಸಲಾಗುತ್ತದೆ.

### ಪತ್ರಿಕಾ ಪ್ರಕಟಣೆ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನವು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಹಕಾರದೊಂದಿಗೆ 2016 ನೇ ಅಕ್ಟೋಬರ್ 3 ಮತ್ತು 4 ನೆಯ ದಿನಾಂಕಗಳಂದು ಪ್ರತಿಷ್ಠಾನದಲ್ಲಿ 'ಪದವಿ ಕನ್ನಡ ಬೋಧನೆಯ ವಿವಿಧ ಮಗ್ಗುಲುಗಳು'ಎಂಬ ವಿಷಯವನ್ನು ಕುರಿತ ಎರಡು ದಿನಗಳ ಶಿಬಿರವನ್ನು ಏರ್ಪಡಿಸಿದೆ. ಈ ಶಿಬಿರದಲ್ಲಿ ಭಾಗವಹಿಸುವ ಪದವಿ ಕಾಲೇಜು ಅಧ್ಯಾಪಕರಿಗೆ 'ಅನ್ಯಕಾರ್ಯನಿಮಿತ್ತದ ರಜೆಯ' ಸೌಲಭ್ಯವನ್ನು ಕಾಲೇಜು ಶಿಕ್ಷಣ ನಿರ್ದೇಶನಾಲಯವು ಮಂಜೂರು ಮಾಡಿದೆ. ನುರಿತ ಅಧ್ಯಾಪಕ–ವಿದ್ವಾಂಸರು ಸಂಪನ್ಮೂಲ ವ್ಯಕ್ತಿಗಳಾಗಿರುವ ಈ ಶಿಬಿರದಲ್ಲಿ ಭಾಗವಹಿಸಲು ಆಸಕ್ತರಾದ ಅಧ್ಯಾಪಕರು ಪ್ರತಿಷ್ಠಾನದ ಕಚೇರಿಯಲ್ಲಿ ರೂ 100/– ಶುಲ್ಕದೊಂದಿಗೆ ನೋಂದಣಿ ಮಾಡಿಸಿಕೊಳ್ಳಲು ಕೋರಿದೆ. ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು. ಕಚೇರಿಯ ದೂರವಾಣಿ ಸಂಖ್ಯೆ: 26615877

## ಸಂಪಾದಕೀಯ

ಸೆಪ್ಟೆಂಬರ್ ತಿಂಗಳಿನಲ್ಲಿ ಬಂದ್‌ಗಳ ಕಾರಣಗಳಿಂದ ನಮ್ಮ ಪ್ರತಿಷ್ಠಾನದ ಒಂದು ಕಾರ್ಯಕ್ರಮ ರದ್ದಾಯಿತು ಹಾಗೂ ಇನ್ನೊಂದು ಪ್ರತಿಷ್ಠಿತ ಕಾರ್ಯಕ್ರಮವನ್ನು ಮುಂದೂಡಬೇಕಾಯಿತು. ಈ ಕಾರಣದಿಂದ ನಮ್ಮಂತಹ ಸಣ್ಣ ಸಂಸ್ಥೆಯಲ್ಲಿಯೇ ಸಾಕಷ್ಟು ಸಮಯ, ಸಂಪನ್ಮೂಲಗಳು ಹಾಗೂ ಹಣ ವ್ಯರ್ಥವಾದವು. ಇನ್ನು ಬೃಹತ್ ಸಂಸ್ಥೆಗಳು ಅನುಭವಿಸಿರಬಹುದಾದ ನಷ್ಟಗಳ ಊಹೆ ಮಾಡಿಕೊಳ್ಳಬಹುದು. ನಮ್ಮ ರಾಜ್ಯಕ್ಕೆ ಅನ್ಯಾಯವೂ ಆಗುತ್ತಿದೆ ಹಾಗೂ ಈ ಕಾರಣದಿಂದ ಹತ್ತು ಹಲವು ರೀತಿಗಳಲ್ಲಿ ನಮಗೆ ನಷ್ಟಗಳೂ ಉಂಟಾಗುತ್ತಿವೆ. ಹೀಗೆ ನಷ್ಟವಾಗುತ್ತಿರುವ ಮೌಲ್ಯದ ಹಣ, ಸಂಪನ್ಮೂಲಗಳು ಹಾಗೂ ಸಮಯವನ್ನು ಒಟ್ಟುಗೂಡಿಸಿ ನೀರಿನ ದಕ್ಷ ಬಳಕೆ ಮಾಡುವ ಬಗ್ಗೆಯ ಸಂಶೋಧನೆಗಳಲ್ಲಿ ತೊಡಗಿಸಿದಲ್ಲಿ ಎಲ್ಲರಿಗೂ ಒಳಿತಾಗುತ್ತದೆ ಅಲ್ಲವೇ?

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

### ಅಕ್ಟೋಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಟಿ.ಎಸ್. ವೆಂಕಣ್ಣಯ್ಯ | 1–10–1855 |
| ಬಸರಾಜ ಕಟ್ಟಿಮನಿ | 5–10–1919 |
| ಎಲ್ ಬಸವರಾಜು | 7–10–1919 |
| ಶಿವರಾಮ ಕಾರಂತ | 10–10–1902 |
| ಕೆರೂರ ವಾಸುದೇವ ಚಾರ್ಯ | 15–10–1866 |
| ಡಿಎಲ್ ನರಸಿಂಹಚಾರ್ಯ | 27–10–1906 |
| ಚನ್ನಪ್ಪ ಉತ್ತಂಗಿ | 28–10–1881 |

### ಅಕ್ಟೋಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಡಿವಿಜಿ | 7–10–1975 |
| ಡಾ ಆನೆ ಉಪಾಧ್ಯ | 9–10–1975 |
| ಪುತಿನ | 13–10–1998 |
| ಶ್ರೀರಂಗ | 17–10–1984 |
| ಚದುರಂಗ ಎಂ. ಸುಬ್ರಮಣ್ಯರಾಜು | 19–10–1998 |
| ತಿರುಮಲೆತಾತಾಚಾಯ್ಯ ಶರ್ಮಾ | 20–10–1973 |
| ಬಸವರಾಜ ಕಟ್ಟಿಮನಿ | 23–10–1989 |
| ದೇವುಡು | 24–10–1962 |
| ವ್ಯಾಕರಣ ತೀರ್ಥ ಚಂದ್ರ ಶೇಖರ ಶಾಸ್ತ್ರಿಗಳು | 24–10–1997 |
| ಪಂಜೆಮಂಗೇಶರಾವ್ | 24–10–1937 |
| ದರಾ ಬೇಂದ್ರೆ | 26–10–1986 |
| ಎಸ್. ವಿ ಪರಮೇಶ್ವರ ಭಟ್ಟ | 27–10–2000 |
| ಆನಂದಕಂದ ಬೇಟಗೇರಿ ಕೃಷ್ಣಶರ್ಮಾ | 30–10–1982 |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ದೇಗುಲದಲ್ಲಿ ದನದ ಮಾಂಸ ಬಿಸಾಡುವರು
ಮಸೀದಿಯಲ್ಲಿ ಹಂದಿ ಮಾಂಸ ಚೆಲ್ಲುವರು
ಚರ್ಚುಗಳನ್ನು ಹಾಡಹಗಲೇ ಧ್ವಂಸ ಮಾಡುವರು
ಅಂಬೇಡ್ಕರ ಪುತ್ಥಳಿಗೆ ಮದ್ಯದ ಸ್ನಾನ ಮಾಡಿಸುವರು
'ದೇಗುಲ', 'ಮಸೀದಿ', 'ಚರ್ಚು', 'ಪುತ್ಥಳಿ', ಗುಡಿಸಲುಗಳ
ಹೆಸರಿನಲ್ಲಿ ರಾಜಕೀಯ ಮಾಡುವ ಪುಂಡರಿಗೆ
ಸುಜ್ಞಾನ ಬರಿಸೋ 'ಅಲ್ಲಾರಖಾ'. ॥12॥

## ದಿನಾಂಕ 14–10–2016 ರಂದು ನಡೆಯುವ ಅಕ್ಕರಗೊಟ್ಟಿ –– ತಿಂಗಳ ಮುಕ್ತ ಸಾಂಸ್ಕೃತಿಕ ಚಿಂತನೆಯಲ್ಲಿ ಚರ್ಚೆ ಮಾಡಲಾಗುವ ಈ ಪದ್ಯವನ್ನು ಆಸಕ್ತರು ಅರ್ಥಮಾಡಿಕೊಂಡು ಭಾಗವಹಿಸಬಹುದು

### ಪಂಪನ ದೃಷ್ಟಿಯಲ್ಲಿ ಸರಸ್ವತಿ

ಕ್ಷಯಮಣಮಿಲ್ಲ ಕೇಳ್ದು ಕಡೆಗಂಡವನಾವನುಮಿಲ್ಲೆನಲ್ ತದ
ಕ್ಷಯ ನಿಧಿ ತಾನೆ ತನ್ನನೊಸೆದೋಲಗಿಪಂಗರಿದಿಲ್ಲೆನಿಪ್ಪ ವಾ
ಙ್ಮಯಮನಿತರ್ಕಮಂಬಿಕೆ ಸರಸ್ವತಿ ಮನ್ಮುಖಪದ್ಮ ರಂಗದೇ
ಳ್ಗೆಯನೆಡೆಗೊಂಡು ಕೊಂಡು ಕೊನೆದೀಗರಿಗಂಗೆ ವಿಶುದ್ಧ
ಬುದ್ಧಿಯಂ ॥ 1–5 ॥ (ಪಂಪಭಾರತ)

ಪರಮ ಜಿನೇಂದ್ರ ವಾಣಿಯೆ ಸರಸ್ವತಿ ಬೇಱದು ಪೆಣ್ಣರೂಪಮಂ
ಧರಿಯಿಸಿ ಸಿಂಧುದಲ್ಲದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಳ್ಕೆಮಗಿಲ್ಲಿಯೆ
ವಾಗ್ವಿಳಾಸಮಂ(॥1–9॥) (ಆದಿಪುರಾಣ)

ವ॥ ಅದಱಿಂ ನಿಮಗೀವಯಸಮೆಂಬುದು ವಿದ್ಯಾಭ್ಯಾಸ
ಯೋಗ್ಯಮೆಂದು ವಿಶಾಲ ಹೇಮ ಪಟ್ಟಕದೊಳ್ ಆತ್ಮಹೃತ್ಪದ್ಮ
ಪದ್ಮೆಯಂ ಸರಸ್ವತಿಯಂ ಪೂಜಾಪೂರ್ವಕಮಧಿವಾಸಿಸಿ ನಿಜ
ತನೂಜೆಯರಿರ್ವರು ಮನೆರಡುಂ ಕೆಲದೊಳಿರಿಸಿ

## ತಿದ್ದುಪಡಿ

ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿ ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರ ಬಗ್ಗೆ 'ಅಭಿನಂದನೆ'ಗಳು ಪುಟ6 ರಲ್ಲಿ ಪ್ರಕಟವಾಗಿದ್ದು ಅದರಲ್ಲಿ ಕೆಲವು ತಪ್ಪುಗಳು ಅಚ್ಚಾಗಿದ್ದವು. ಸೆಂಟ್ ಜೋಸೆಫ್ ಸಂಜೆ ಕಾಲೇಜಿನಲ್ಲಿ ಅವರ ಪತಿ ಶ್ರೀ ಸ. ನ.ವಿಶ್ವೇಶ್ವರಯ್ಯನವರು ಪ್ರಾಧ್ಯಾಪಕರಾಗಿದ್ದರು. ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರಿಗೆ ಕನ್ನಡ ಸಂಘರ್ಷ ಸಮಿತಿಯಿಂದ 'ಕನ್ನಡ ಕಟ್ಟಾಳು' ಪ್ರಶಸ್ತಿಯನ್ನು ನೀಡಿ ಗೌರವಿಸಿರುತ್ತಾರೆ.

ಹಿಂದಿನ ಸಂಚಿಕೆಯಲ್ಲಿ ತಪ್ಪು ಮಾಹಿತಿ ಪ್ರಕಟಗೊಂಡಿದ್ದಕ್ಕೆ ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಹಾಗೂ ಎಲ್ಲ ಓದುಗರಲ್ಲಿ ಕ್ಷಮೆ ಕೋರುತ್ತೇವೆ

# ಅಕ್ಟೋಬರ್ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**ದಿನಾಂಕ 3–10–2016 ಮತ್ತು 4–10–2016 – ಸೋಮವಾರ ಹಾಗೂ ಮಂಗಳವಾರ**

ಬೆಳಿಗ್ಗೆ 10 ಘಂಟೆಯಿಂದ ಸಂಜೆ 5 ಘಂಟೆಯವರೆಗೆ

**'ಕನ್ನಡ ಬೋಧನೆಯ ವಿವಿಧ ಮಗ್ಗುಲುಗಳು'**

ಕರ್ನಾಟಕ ಸಾಹಿತ್ಯ ಅಕಾಡೆಮಿ ಅವರ ಸಹಯೋಗದಲ್ಲಿ

(ಪದವಿ ಕಾಲೇಜುಗಳ ಯುವ ಕನ್ನಡ ಅಧ್ಯಾಪಕರಿಗೆ ಒಂದು ಶಿಬಿರ)

3–10–2016 ಬೆಳಗ್ಗೆ 10 ಘಂಟೆಗೆ ಉದ್ಘಾಟನೆ

ಪ್ರೊ॥ ಮಾಲತಿ ಪಟ್ಟಣ ಶೆಟ್ಟಿ

ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

4–10–2016 ಅಪರಾಹ್ನ 3–45 ಘಂಟೆಗೆ ಸಮಾರೋಪ

ಪ್ರೊ॥ ಎಸ್.ಜಿ. ಸಿದ್ದರಾಮಯ್ಯ

ಖ್ಯಾತ ಕವಿಗಳು

**05–10–2016 ಬುಧವಾರ ಸಂಜೆ 6:00 ಗಂಟೆ**

**ಗಮಕವಾಹಿನಿ–8**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮ

ನೇತೃತ್ವ : ಶ್ರೀಮತಿ ಸಿ.ವಿ.ಶ್ರೀಮತಿ





**ದಿನಾಂಕ 14–10–2016 ಶುಕ್ರವಾರ ಸಂಜೆ 6:00 ಗಂಟೆ**

**'ಅಕ್ಕರಗೊಟ್ಟಿ'**

ತಿಂಗಳ ಮುಕ್ತ ಸಾಂಸ್ಕೃತಿಕ ಚಿಂತನೆ

ವಿಷಯ: ಪಂಪನ ದೃಷ್ಟಿಯಲ್ಲಿ ಸರಸ್ವತಿ

ಚಾಲನೆ: ನಳಿನೀ ವೆಂಕಟೇಶ್

(ಪದ್ಯವನ್ನು ಪುಟ 2 ರಲ್ಲಿ ನೋಡಬಹುದು)



**16–10–2016 ಭಾನುವಾರ ಬೆಳಗ್ಗೆ 10.30 ಗಂಟೆಗೆ**

**ಕೃತಿ–ಚಿತ್ರ –5**

(ಸಾಹಿತ್ಯ ಕೃತಿ ಆಧಾರಿತ ಚಲನ ಚಿತ್ರ ಪ್ರದರ್ಶನ)

ಆರ್ ಕೆ ನಾರಾಯಣ್ ಅವರ ಕಾದಂಬರಿ ಆಧಾರಿತ

"ಬ್ಯಾಂಕರ್ ಮಾರ್ಗಯ್ಯ" ಚಲನ ಚಿತ್ರ ಪ್ರದರ್ಶನ

ಅತಿಥಿಗಳು : ನಿರ್ದೇಶಕರು–ಶ್ರೀಟಿ.ಎಸ್. ನಾಗಾಭರಣ.

ಸಂಯೋಜಕರು : ಶ್ರೀ ಎನ್.ಎಸ್. ಶ್ರೀಧರಮೂರ್ತಿ



**18–10–2016 ಕನ್ನಡ ಸಂಸ್ಕೃತಿ ದರ್ಶನ ಮಂಗಳವಾರ ಸಂಜೆ : 6:00ಗಂಟೆ**

(ಸಾಕ್ಷ್ಯ ಚಿತ್ರಗಳ ಪ್ರದರ್ಶನ)



**22–10–2016 ಶನಿವಾರ ಸಂಜೆ : 6:00 ಗಂಟೆಗೆ**

ರಂಗಸಂವಾದ



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ

ಕನ್ನಡಕ್ಕೊಬ್ಬನೇ ಕೈಲಾಸಂ.

ಕಥೆ : ಬಿ.ಎಸ್. ಕೇಶವರಾವ್

ರಂಗರೂಪ : 'ವಿನ್ಯಾಸ ಹಾಗೂ ರಂಗದ ಮೇಲೆ ಶ್ರೀಧರ್' –ಏಕ ವ್ಯಕ್ತಿ ಪ್ರದರ್ಶನ

ನಿರ್ದೇಶನ :ಶ್ರೀ ವಿಜಯ್ ಎ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಆಗಸ್ಟ್ 2016– ಸೆಪ್ಟೆಂಬರ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

**"ದಾಸ ಸಾಹಿತ್ಯಕ್ಕೆ ವಾದಿರಾಜರ ಕೊಡುಗೆ"**



23–8–2016ರಂದು ನಡೆದ ಸುಬ್ಬಯ್ಯ ಶಾಸ್ತ್ರೀ ಹೆಗಡೆ, ಎಂ.ಕೆ. ವಿಜಯಲಕ್ಷ್ಮೀ, ಎನ್. ಅನಂತರಂಗಚಾರ್, ಅನಂತರಂಗ ಪ್ರತಿಷ್ಠಾನ ದತ್ತಿ ಅಡಿಯಲ್ಲಿ ಪ್ರೊ॥ ವಾದಿರಾಜ್, ವಿಜಯಕಾಲೇಜು, ಆರ್.ವಿ.ರೋಡ್, ಬೆಂಗಳೂರು "ದಾಸ ಸಾಹಿತ್ಯಕ್ಕೆ ವಾದಿರಾಜರ ಕೊಡುಗೆ" ಎಂಬ ವಿಷಯದ ಬಗ್ಗೆ ವಿದ್ವತ್ ಪೂರ್ಣ ಉಪನ್ಯಾಸ ನೀಡಿದರು. ಅವರು ವಾದಿರಾಜರ ಜೀವನ ಚರಿತ್ರೆ ಹಾಗೂ ಅವರ ಸಾಧನೆಗಳ ಬಗ್ಗೆಯ ವಿವರಗಳನ್ನು ನೀಡಿ ನಂತರ ದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಲು ಅವರು ರಚಿಸಿದ ಸಾಹಿತ್ಯ ಹಾಗೂ ಪ್ರಚುರ ಪಡಿಸಲು ಕೈಗೊಂಡ ಕ್ರಮಗಳನ್ನು ವಿವರಿಸಿದರು.

ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ.ಪಿವಿ ನಾರಾಯಣ ಅವರು ದತ್ತಿ ದಾನಿಗಳ ಬಗ್ಗೆ ವಿವರಗಳನ್ನು ತಿಳಿಸಿ ಉಪನ್ಯಾಸಕಾರರ ಪರಿಚಯ ಮಾಡಿ ಸಭೆಯನ್ನು ಸ್ವಾಗತಿಸಿದರು. ಗೌರವ ಕಾರ್ಯದರ್ಶಿ ಅಬ್ದುಲ್ ಬಷೀರ್ ವಂದನಾರ್ಪಣೆ ಮಾಡಿದರು.

**"ರಂಗ ಸಂವಾದ"**

ಬಿ. ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ "ರಂಗ ಸಂವಾದ" ಹೊಸ ಕಾರ್ಯಕ್ರಮವನ್ನು ದಿನಾಂಕ 27ನೇ ಆಗಸ್ಟ್ 2016 ರಂದು ಡಾ. ಪಿ.ವಿ. ನಾರಾಯಣ ಉದ್ಘಾಟಿಸಿ ಈ ಕಾರ್ಯಕ್ರಮದ ಆಶಯವನ್ನು ವಿವರಿಸಿದರು. ಗ್ರೀನ್ ಸ್ಟೇಜ್ ನ ರೂವಾರಿ ಶ್ರೀ ವಿಜಯ್ ಅವರು ಸಾಮಾಜಿಕ ಸಮಸ್ಯೆಗಳ ಬಗ್ಗೆ ಗಮನ ಸೆಳೆಯಲು ಬೀದಿ ನಾಟಕಗಳ ಮೂಲಕ ಅವರ ತಂಡ ಮಾಡುತ್ತಿರುವ ಪ್ರಯತ್ನಗಳ ವಿವರಗಳನ್ನು ನೀಡಿದರು.

ಪ್ರತಿ ತಿಂಗಳೂ ನಾಲ್ಕನೆಯ ಶನಿವಾರ ಸಂಜೆ ನಡೆಯುವ ಈ ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ. ಈ ಮಾಲೆಯ ಮೊದಲ ನಾಟಕ "ಮಾತಾಡ್ತಾನೆ ನೋಡಿ ನಮ್ಮ ಗಣೇಶ" ಎಂಬ ನಾಟಕದ ಪ್ರದರ್ಶನ ಮಾಡಲಾಯಿತು.




**ಗಮಕ ವಾಹಿನಿ ಕಾರ್ಯಕ್ರಮ ಮಾಲೆ –8**

(ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಸಹಯೋಗದೊಂದಿಗೆ)



ದಿನಾಂಕ 7ನೇ ಸೆಪ್ಟಂಬರ್ 2016ರಂದು ಅನಿವಾರ್ಯ ಕಾರಣಗಳಿಂದಾಗಿ, ಹಿಂದೆಯೇ ಪ್ರಕಟಿಸಿದ ಕಾರ್ಯಕ್ರಮಕ್ಕೆ ಬದಲಾಗಿ, ಜೈಮಿನಿ ಭಾರತದ 'ಸೀತಾ ಪರಿತ್ಯಾಗ'ದ ಪ್ರಸಂಗವನ್ನು ಆಯೋಜಿಸಲಾಗಿತ್ತು. ವಾಚನಕಾರರಾಗಿ ಹೆಸರಾಂತ ಶಸ್ತ್ರವೈದ್ಯ ಮತ್ತು ಪ್ರಸೂತಿ ತಜ್ಞರಾದ ಡಾ॥ಕೆ.ಶ್ರೀನಿವಾಸ್ ಅವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಅವರು ಚಿಕ್ಕಂದಿನಿಂದಲೂ ಸಂಗೀತ ಕ್ಷೇತ್ರದಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿ, ಕರ್ನಾಟಕ ಸಂಗೀತದಲ್ಲಿ ವಿದ್ವತ್‌ಗಳಿಸಿದ್ದಾರೆ. ಗಮಕವಾಚನದಲ್ಲಿ ವಿಶೇಷವಾದ ಅನುಭವಗಳಿಸಿದ್ದಾರೆ. ಪ್ರಸ್ತುತ ಇವರು ವಾಣಿ ವಿಲಾಸ ಆಸ್ಪತ್ರೆಯಲ್ಲಿ ಶಸ್ತ್ರ ವೈದ್ಯರಾಗಿ ಮತ್ತು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲದಲ್ಲಿ ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಶ್ರೀಯುತರಿಗೆ ಸರಿಸಾಟಿಯಾದ ವ್ಯಾಖ್ಯಾನಕಾರರಾಗಿ ನಾಡಿನ ಪ್ರಸಿದ್ಧ ಗಮಕ ವ್ಯಾಖ್ಯಾನಕಾರರಾದ ಶ್ರೀಮತಿ ನಾಗರತ್ನ ಮೂರ್ತಿಯವರು ಭಾಗವಹಿಸಿ, ಕಥಾ ಪ್ರಸಂಗವನ್ನು ಬಹಳ ಯಶಸ್ವಿಯಾಗಿ ನಡೆಸಿಕೊಟ್ಟರು. ಶ್ರೀಮತಿ ನಾಗರತ್ನ ಅವರು ದಾಸ ಸಾಹಿತ್ಯದ ಮುಂಡಿಗೆಗಳು ಮತ್ತು ಇತರ ಕೃತಿಗಳನ್ನು ರಚಿಸಿದ್ದಾರೆ.

ಡಾ॥ ಪಿ.ವಿ.ನಾರಾಯಣ ಅವರು ಸರ್ವರಿಗೂ ಸ್ವಾಗತ ಕೋರಿದರು. ಪ್ರೊ॥ ಅಬ್ದುಲ್ ಬಷೀರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ**

ದಿನಾಂಕ 2ನೇ ಸೆಪ್ಟೆಂಬರ್ 2016 ರಂದು ನಡೆದ ಭಾರತ ಬಂದ್ ಪ್ರಯುಕ್ತ ಈ ಕಾರ್ಯಕ್ರಮವನ್ನು ರದ್ದು ಪಡಿಸಲಾಯಿತು.

**ಅಕ್ಕರಗೊಟ್ಟಿ**

(ತಿಂಗಳ ಮುಕ್ತ ಸಾಂಸ್ಕೃತಿಕ ಚಿಂತನೆ)

16–9–2016 ರಂದು ನಡೆದ ಅಕ್ಕರಗೊಟ್ಟಿ ಕಾರ್ಯಕ್ರಮದಲ್ಲಿ ಪ್ರೊ॥ ಕೆ. ಎಸ್. ಮಧುಸೂದನ್ ಅವರು "ಕತಕಬೀಜ : ಒಂದು ಜಿಜ್ಞಾಸೆ" ಎಂಬ ವಿಷಯದ ಬಗ್ಗೆ ತಾವು ನಡೆಸಿದ ಅಧ್ಯಯನಗಳನ್ನು ವಿವರಿಸಿ ಚರ್ಚೆಗೆ ಚಾಲನೆ ನೀಡಿದರು. ಚರ್ಚೆಯಲ್ಲಿ ಡಾ॥ಪಿ.ವಿ.ನಾರಾಯಣ, ಪ್ರೊ.ಜಿ ಅಬ್ದುಲ್ ಬಷೀರ್, ಡಾ.ಮುರಳೀಧರ, ಡಾ.ಕೆ.ಆರ್. ಗಣೇಶ್, ರವೀಂದ್ರನಾಥ, ಡಾ.ಅನಿಲ್ ಕುಮಾರ್ ಮುಂತಾದವರು ಭಾಗವಹಿಸಿದರು. ಚರ್ಚೆ ಅರ್ಥಪೂರ್ಣವಾಗಿ ನಡೆಯಿತು.



ಕೃತಿ–ಚಿತ್ರ –5

ಆರ್ ಕೆ ನಾರಾಯಣ್ ಅವರ ಕಾದಂಬರಿ ಆಧಾರಿತ

# "ಬ್ಯಾಂಕರ್ ಮಾರ್ಗಯ್ಯ" ಚಲನ ಚಿತ್ರ ಪ್ರದರ್ಶನ

**ಕಿರು ಪರಿಚಯ**

## ಟಿ.ಎಸ್.ನಾಗಾಭರಣ



ಹಿರಿತೆರೆ, ಕಿರುತೆರೆ, ರಂಗಭೂಮಿ ಮೂರೂ ಕ್ಷೇತ್ರದಲ್ಲಿ ದೊಡ್ಡ ಸಾಧನೆ ಮಾಡಿರುವ ನಾಗಾಭರಣ ಬಿ.ವಿ.ಕಾರಂತರ ಗರಡಿಯಲ್ಲಿ ಪಳಗಿದವರು. 'ಬೆನಕ' ರಂಗತಂಡದಲ್ಲಿ ಪ್ರಮುಖವಾಗಿ ಬೆಳೆದ ಭರಣ ಕಾರಂತರ ಕಾಡು, ಚೋಮನ ದುಡಿ, ತಬ್ಬಲಿಯು ನೀನಾದೆ ಮಗನೆ ಚಿತ್ರಗಳಿಗೆ ಸಹ ನಿರ್ದೇಶಕರಾಗಿ ಅನುಭವ ಪಡೆದರು. 'ಗ್ರಹಣ' ಅವರ ನಿರ್ದೇಶಿಸಿದ ಮೊದಲ ಚಿತ್ರ. ಇದು ರಾಷ್ಟ್ರೀಯ ಭಾವೈಕ್ಯತೆಗಾಗಿ ರಾಷ್ಟ್ರಪ್ರಶಸ್ತಿ ಪಡೆಯಿತು.ಮುಂದೆ ಸಂತ ಶಿಶುನಾಳ ಶರೀಫ ಮತ್ತು ಕಲ್ಲರಳಿ ಹೂವಾಗಿ ಚಿತ್ರಗಳಿಗಾಗಿಯೂ ಈ ಪ್ರಶಸ್ತಿ ಪಡೆದ ಭರಣ ಈ ಸಾಧನೆ ಮಾಡಿದ ರಾಷ್ಟ್ರದ ಮೊದಲಿಗರು ಎನ್ನಿಸಿಕೊಂಡಿದ್ದಾರೆ. ಅವರ ನಿರ್ದೇಶನದ 34 ಚಿತ್ರಗಳಿಗೆ ಒಂಭತ್ತು ರಾಷ್ಟ್ರಪ್ರಶಸ್ತಿಗಳು, 14 ರಾಜ್ಯ ಪ್ರಶಸ್ತಿಗಳೂ ಲಭಿಸಿವೆ. ಅವರು ನಿರ್ದೇಶಿಸಿದ ಏಳು ಚಿತ್ರಗಳು ಪನೋರಮಾ ಚಿತ್ರೋತ್ಸವಕ್ಕೆ ಆಯ್ಕೆಯಾಗಿವೆ. ಅನ್ವೇಷಣೆ, ಬ್ಯಾಂಕರ್ ಮಾರ್ಗಯ್ಯ, ಮೈಸೂರು ಮಲ್ಲಿಗೆ, ನಾಗಮಂಡಲ, ಆಕಸ್ಮಿಕ, ಜನುಮದ ಜೋಡಿ ಅವರ ಪ್ರಮುಖ ಚಿತ್ರಗಳು. 1998–99ನೇ ಸಾಲಿನ ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ಪಡೆದಿರುವ ನಾಗಾಭರಣ ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಹಲವಾರು ಗೌರವಗಳಿಗೆ ಪಾತ್ರರಾಗಿದ್ದಾರೆ. ರಾಜ್ಯ ಮತ್ತು ರಾಷ್ಟ್ರಮಟ್ಟದ ಹಲವು ಸಮಿತಿಗಳ ಅಧ್ಯಕ್ಷತೆ, ಸದಸ್ಯತ್ವದ ಗೌರವಗಳು ಭರಣ ಅವರಿಗೆ ದೊರಕಿದೆ. ಹಲವು ಇತರ ಗೌರವಗಳಿಗೂ ಪಾತ್ರರಾಗಿರುವ ನಾಗಾಭರಣ ಕನ್ನಡ ಚಲನಚಿತ್ರ ಅಕಾಡಮಿಯ ಸ್ಥಾಪಕ ಅಧ್ಯಕ್ಷರು.

## ಬ್ಯಾಂಕರ್ ಮಾರ್ಗಯ್ಯ

ಕಿರು ವಿವರ : ಬಿಡುಗಡೆಯ ವರ್ಷ: 1983 ನಿರ್ಮಪಕರು: ಕೋಮಲ್ ಪ್ರೊಡಕ್ಷನ್ಸ್ ನಿರ್ದೇಶಕರು: ಟಿ.ಎಸ್.ನಾಗಾಭರಣ ಕಥೆ: ಆರ್.ಕೆ.ನಾರಾಯಣ್ ಅವರ 'ಫೈನಾಷಿಯಲ್ ಎಕ್ಸ್‌ಪರ್ಟ್' ಚಿತ್ರಕಥೆ ಸಂಭಾಷಣೆ: ಟಿ.ಎಸ್.ನಾಗಾಭರಣ ಗೀತೆಗಳು: ವಿಜಯನಾರಸಿಂಹ ಸಂಗೀತ: ವಿಜಯ ಭಾಸ್ಕರ್ ಸಂಕಲನ: ಸುರೇಶ್ ಅರಸ್ ಛಾಯಾಗ್ರಹಣ: ಎಸ್.ರಾಮಚಂದ್ರ

ಕಥಾಸಾರಾಂಶ; ಮಾಲ್ಗುಡಿಯ ಬ್ಯಾಂಕಿನೆದುರು ಅರ್ಜಿ ಬರೆಯುವ ಅದರ ಜೊತೆಗೆ ಲೇವಾದೇವಿ ಮಾಡುವ ಮೂಲಕ ಬದುಕನ್ನು ಕಟ್ಟಿಕೊಂಡವನು ಮಾರ್ಗಯ್ಯ. ಅವನನ್ನು ಹೊಸ ಬದಲಾವಣೆಗಳಾದಂತೆ ಬ್ಯಾಂಕಿನವರು ಓಡಿಸಿ ಬಿಟ್ಟರು. ಅವನು ಲೆಕ್ಕ ಬರೆಯುತ್ತಿದ್ದ ಪುಸ್ತಕ ಮೋರಿಗೆ ಬಿತ್ತು. ಇದ್ದಕಿದ್ದಂತೆ ಜೀವನ ನಿರ್ವಹಣೆಯೇ ಕಷ್ಟವಾದಷ್ಟು ಕಡು ಬಡವನಾಗಿ ಬಿಟ್ಟ. ಆಕಸ್ಮಿಕವಾಗಿ ಡಾ.ಪಾಲ್ ಅವರ ಪರಿಚಯವಾಯಿತು. ಅವರ ಸಲಹೆಯಿಂದ ಲೈಂಗಿಕ ಪುಸ್ತಕಗಳನ್ನು ಪ್ರಕಟಿಸಿ ಹಣ ಮಾಡಿದ. ಮತ್ತೆ ಲೇವಾದೇವಿಯನ್ನು ಕೂಡ ಆರಂಭಿಸಿದ. ಆದರೆ ಎಲ್ಲವೂ ಸರಿ ಹೋಯಿತು ಎನ್ನುವಾಗ ಮಗನ ಕೆಟ್ಟಚಾಳಿ, ಡಾ.ಪಾಲ್ ಕುತಂತ್ರದಿಂದ ಮತ್ತೆ ದಿವಾಳಿಯಾದ. ಹಣಕಾಸು ವ್ಯವಹಾರದಲ್ಲಿನ ಒಂದು ಕಾಲಘಟ್ಟದ ಏರುಪೇರನ್ನು ಚಿತ್ರ ಹೇಳುತ್ತದೆ.




## ರಾಶಿಪುರಂ ಕೃಷ್ಣಸ್ವಾಮಿ ನಾರಾಯಣ್

(ಅಕ್ಟೋಬರ್ 10, 1906 – ಮೇ 13, 2001)



ಲೇಖಕ, ಇಂಗ್ಲೀಷ್ ಭಾಷೆಯ ಕಾದಂಬರಿಕಾರ, ಅಂಕಣಕಾರ, ಭಾರತದ ಪ್ರಸಿದ್ಧ ಕಾದಂಬರಿಕಾರರಲ್ಲಿ ಒಬ್ಬರು

ಆಂಗ್ಲ ಭಾಷೆಯಲ್ಲಿ ಬರೆದ ನಾರಾಯಣ್ ಅವರ ಕಾದಂಬರಿಗಳು ಪಾತ್ರಗಳ ನೈಜತೆ, ಸರಳತೆ ಮತ್ತು ಮೃದು ಹಾಸ್ಯಕ್ಕೆ ಹೆಸರಾಗಿವೆ. ಅವರ ಬಹುಪಾಲು ಕಥೆಗಳು "ಮಾಲ್ಗುಡಿ" ಎಂಬ ದಕ್ಷಿಣ ಭಾರತದ ಕಾಲ್ಪನಿಕ ಸ್ಥಳದಲ್ಲಿ ನಡೆಯುತ್ತವೆ. ನಾರಾಯಣ್ ಅವರ ಮೊದಲ ಕಾದಂಬರಿ ಸ್ವಾಮಿ ಮತ್ತು ಗೆಳೆಯರು. ಮೊದಲಿಗೆ ಯಾವ ಪ್ರಕಾಶಕರೂ ಇದನ್ನು ಪ್ರಕಟಿಸಲು ಒಪ್ಪಿರಲಿಲ್ಲ. ನಂತರ ಇದರ ಹಸ್ತಪ್ರತಿಯನ್ನು ಬ್ರಿಟಿಷ್ ಲೇಖಕ ಗ್ರಹಾಂ ಗ್ರೀನ್ ಗೆ ಕಳಿಸಿದಾಗ ಅವರು ಅದನ್ನು ಇಷ್ಟಪಟ್ಟು ಅದರ ಪ್ರಕಟಣೆಗೆ ಕಾರಣರಾದರು. ಆನಂತರ ಗ್ರಹಾಂ ಗ್ರೀನ್ ನಾರಾಯಣ್ ಅವರ ಜೀವನಪರ್ಯಂತ ಆಪ್ತ ಮಿತ್ರರೂ ಮತ್ತು ಅಭಿಮಾನಿಯೂ ಆಗುಳಿದರು. ಈ ಮೊದಲ ಪುಸ್ತಕದ ನಂತರ ನಾರಾಯಣ್ ಅನೇಕ ಕಾದಂಬರಿಗಳನ್ನು ಬರೆದರು. ಇವರು ಕೆಲ ಕಾದಂಬರಿಗಳಲ್ಲಿ ತಮ್ಮ ಜೀವನದ ಅಂಶಗಳನ್ನೂ ಸೇರಿಸಿದ್ದಾರೆ – ಉದಾಹರಣೆಗೆ ದಿ ಇಂಗ್ಲಿಷ್ ಟೀಚರ್. ನಾರಾಯಣ್ ಅವರ ಬಹುಪಾಲು ಕೃತಿಗಳು ದೈನಂದಿನ ಜೀವನವನ್ನು ಕುರಿತವು. ಭಾರತೀಯ ಪುರಾಣಗಳ ಬಗ್ಗೆಯೂ ಕೆಲವು ಪುಸ್ತಕಗಳನ್ನು ಬರೆದಿದ್ದಾರೆ.

ಪದ್ಮಭೂಷಣ, ಪದ್ಮವಿಭೂಷಣ, ಎ.ಸಿ.ಬೆನ್‌ಸನ್ ಮೆಡಲ್, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮುಂತಾದ ಪ್ರಶಸ್ತಿಗಳಿಂದ ಪುರಸ್ಕೃತರಾದ ದಿವಂಗತ ಆರ್.ಕೆ.ನಾರಾಯಣ್ ಅವರ ಮೈಸೂರಿನ ಮನೆಯನ್ನು ಪಾರಂಪರಿಕ ಕಟ್ಟಡ ಎಂದು ಸರ್ಕಾರ ಘೋಷಿಸಿದೆ. ಖ್ಯಾತ ಆಂಗ್ಲಭಾಷಾ ವ್ಯಂಗ್ಯಚಿತ್ರಕಾರ ಆರ್.ಕೆ.ಲಕ್ಷ್ಮಣ್ ಇವರ ಸಹೋದರರಾಗಿದ್ದಾರೆ.



# ಕಾವೇರಿ ನದಿ ಸಾಹಿತ್ಯ – ಒಂದು ಚಿಂತನೆ



– ಬಿ.ಆರ್.ರವೀಂದ್ರನಾಥ

2016 ರ ಸೆಪ್ಟೆಂಬರ್ ತಿಂಗಳು ಬಂದ್ ನಿಂದ ಆರಂಭವಾಗಿ ಇಡೀ ತಿಂಗಳು ಹಲವಾರು ಬಾರಿ ಆತಂಕದ ಪರಿಸ್ಥಿತಿಗಳು ನಿರ್ಮಾಣವಾಗಿದ್ದವು. ವಿಶ್ವದಾದ್ಯಂತ ನೆಲ, ಜಲ ಹಾಗೂ ಭಾಷೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಭಾವನಾತ್ಮಕತೆ ದೊಡ್ಡ ಪಾತ್ರ ವಹಿಸುತ್ತದೆ. ಇಂತಹ ಸನ್ನಿವೇಶಗಳಲಿ ಎಲ್ಲರಿಗೂ ತಾವೂ ಸಹ ಏನಾದರೂ ಮಾಡಬೇಕೆಂಬ ತುಡಿತ ಉಂಟಾಗಿ ತಮಗೆ ತೋರಿದ ಕ್ರಮಗಳನ್ನು ಕೈಗೊಳ್ಳುವುದು ಸ್ವಾಭಾವಿಕ. ಈ ಬಾರಿಯೂ ಅದೇ ರೀತಿ ಆಯಿತು. ಈ ಬಾರಿಯೂ ಬಹುತೇಕವಾಗಿ ಅಮಾಯಕರು ಹಾಗೂ ತಪ್ಪೇ ಮಾಡಿಲ್ಲದವರಿಗೆ ಅಪಾರ ಮಟ್ಟದ ತೊಂದರೆಗಳು ಉಂಟಾದವು. ನಂತರದ ದಿನಗಳಲ್ಲಿ ವ್ಯಾಪಕ ಹಿಂಸಾಚಾರ ನಡೆದು ಆಸ್ತಿಪಾಸ್ತಿ ನಷ್ಟವಾಗುವುದರ ಜೊತೆಗೆ ಗೋಲೀಬಾರ್ ನಡೆದು ಸಾವು ನೋವು ಸಹ ಸಂಭವಿಸಿ ಬಹುತೇಕ ಶಾಂತಿ ಪ್ರಿಯವಾದ ಹಾಗೂ ಎಲ್ಲಾ ಭಾಷಿಕರಿಗೂ ಜೀವನ ನಡೆಸುವ ಅವಕಾಶಗಳನ್ನು ಮಾಡಿಕೊಡುತ್ತಿರುವ ಬೆಂಗಳೂರು ನಗರದಲ್ಲಿ ಕರ್ಫ್ಯೂ ಸಹ ವಿಧಿಸುವ ಸ್ಥಿತಿಗೆ ತಲುಪಿದ್ದು ನಿಜಕ್ಕೂ ಶೋಚನೀಯ.

ಈ ಸ್ಥಿತಿ ತಲುಪಲು ಕಾರಣವಾದ ಪ್ರಮುಖ ವಿಷಯವೆಂದರೆ ಉಚ್ಚ ನ್ಯಾಯಾಲಯದ ತೀರ್ಮಾನದ ಹಠಾತ್ ಪ್ರಕಟಣೆ ಎನ್ನಬಹುದು. ಅನಿರೀಕ್ಷಿತವಾಗಿ ಬಂದೊರಗಿದ ಅಪ್ರಿಯ ಸುದ್ದಿ ಇಡೀ ರಾಜ್ಯದಲ್ಲಿ ಭುಗಿಲು ಎಬ್ಬಿಸಿತು. ಸುದ್ದಿ ವಾಹಿನಿಗಳು ಹಾಗೂ ದಿನ ಪತ್ರಿಕೆಗಳು ಇಂತಹ ಮಹತ್ವವಾದ ಹಾಗೂ ಹೆಚ್ಚು ಪರಿಣಾಮ ಬೀರುವ ವಿಷಯದ ಬಗ್ಗೆ ದಿನಂಪ್ರತಿ ಪ್ರಕಟಿಸುತ್ತಿದ್ದಲ್ಲಿ ಹಿಂಸಾಚಾರವಾಗದಿರುವ ಹಾಗೆ ಸೂಕ್ತ ಸಿದ್ದತೆಗಳನ್ನು ಮಾಡಿಕೊಂಡು ಇಂತಹ ಬೆಳವಣಿಗೆ ಆಗದಿರಲು ಪ್ರಯತ್ನಿಸಬಹುದಾಗಿತ್ತು. ಇದೇ ಮಾದರಿಯಲ್ಲಿ ಕರ್ನಾಟಕ ಸರ್ಕಾರ ಪ್ರತಿದಿನವೂ ಇದರ ಬಗ್ಗೆಯ ಮಾಹಿತಿಗಳನ್ನು ಅಧಿಕೃತವಾಗಿ ಬಿಡುಗಡೆ ಮಾಡುತ್ತಿದ್ದಲ್ಲಿ ಇಂತಹ ಪರಿಸ್ಥಿತಿ ಉಂಟಾಗುತ್ತಿರಲಿಲ್ಲವೇನೋ.

ಈ ಪ್ರತಿಭಟನೆಯ ಇನ್ನೊಂದು ಆಯಾಮ ಎಂದರೆ ರಸ್ತೆಗಿಳಿದು ಬಂದ್ ಆಚರಿಸಲು ಅಂಗಡಿ ಮುಂಗಟ್ಟುಗಳನ್ನು ಮುಚ್ಚಿಸುವವರ ಪಾತ್ರ ಹೆಚ್ಚಿತ್ತು. ಕನ್ನಡ ಚಿತ್ರ ರಂಗದ ಪ್ರಮುಖರು ಹಾಗೂ ಸಾಹಿತ್ಯಲೋಕದ ಚಳುವಳಿಗಾರರು ಪ್ರತಿಭಟನೆ ಸಭೆಗಳನ್ನು ನಡೆಸಿ ತಮ್ಮ ಹತಾಶೆಗಳನ್ನು ಹೊರಹಾಕಿದರು.ಆದರೆ ಬಹುತೇಕವಾಗಿ ಎಲ್ಲಾ ಮಟ್ಟಗಳ ಕನ್ನಡ ಪ್ರೇಮಿಗಳಿಗೆ ಮನೆಯೊಳಗೆ ಕುಳಿತುಕೊಂಡು ಟಿವಿ ನೋಡಿಕೊಂಡು ಎರಡೂ ರಾಜ್ಯಗಳ ಸರ್ಕಾರಗಳನ್ನು ದೂಷಿಸಿಕೊಂಡು ತಮ್ಮ ಕೋಪ ಮತ್ತು ನಿರಾಸೆಗಳನ್ನು ಹೊರಹಾಕುವುದು ಬಿಟ್ಟರೆ ಬೇರೆ ರೀತಿಯಲ್ಲಿ ಭಾಗವಹಿಸುವ ದಾರಿಯೇ ಕಾಣಲಿಲ್ಲ.

ಒಂದಷ್ಟು ಜನರು ಸುಪ್ರೀಂ ಕೋರ್ಟಿನ ಆದೇಶವನ್ನು ಸರ್ಕಾರ ಪಾಲಿಸದೆ ವಿರೋಧವನ್ನು ವ್ಯಕ್ತಪಡಿಸಬೇಕು ಎನ್ನುವ ಅಭಿಪ್ರಾಯವನ್ನು ತಳೆದಿರುತ್ತಾರೆ.ಆದರೆ ನ್ಯಾಯಾಲಯದ ಆದೇಶವನ್ನು ವಿರೋಧಿಸಲು ಸಂವಿಧಾತ್ಮಕವಾಗಿ ಲಭ್ಯವಿರುವ ಮಾರ್ಗಗಳನ್ನು ಬಿಟ್ಟು ರಸ್ತೆ ಹೋರಾಟ ಮಾಡಿ ನ್ಯಾಯಾಲಯದ ಆದೇಶವನ್ನು ಧಿಕ್ಕರಿಸುವ ಪರಿಪಾಠ ಅರಾಜಕತೆಗೆ ರಾಜ ಮಾರ್ಗ ಹಾಕಿಕೊಟ್ಟಂತೆ ಆಗುತ್ತದೆ. ಇನ್ನು ಸರ್ಕಾರ ರಾಜೀನಾಮೆ ನೀಡಿ ರಾಜ್ಯಪಾಲರೇ ಆ ಜವಾಬ್ದಾರಿಯನ್ನು ಹೊರಬೇಕೆಂಬ ಮಾತು ಹಲವಾರು ಬಾರಿ ಕೇಳಿಬರುತ್ತಿದೆ. ಹಾಗೆ ಮಾಡಿದಲ್ಲಿ ನಮ್ಮ ರಾಜ್ಯದ ಪರವಾಗಿ ವಿರೋಧಿಸುವ ರಾಜಕೀಯ ಶಕ್ತಿಯೇ ಇಲ್ಲದೇ ಪರಿಸ್ಥಿತಿ ಕರ್ನಾಟಕಕ್ಕೆ ಹೆಚ್ಚು ಮಾರಕವಾಗಬಹುದು.

ಇಂತಹ ಸೂಕ್ಷ್ಮ ವಿಚಾರಗಳಲ್ಲಿ ಅಜ್ಞಾನ ಉಂಟುಮಾಡುವ ಅನಾಹುತಗಳು ಹೆಚ್ಚು. ಈ ಸನ್ನಿವೇಶ ಬಾರದಂತೆ ಮಾಡಲು ನಾವೆಲ್ಲರೂ ನಿಜಾಂಶವನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದು ಉಪಯುಕ್ತವಾಗುವುದರಲ್ಲಿ ಸಂಶಯವಿಲ್ಲ. ಜನ ಸಾಮಾನ್ಯರು ತೊಡಗಿಸಿಕೊಳ್ಳಬಹುದಾದ ಚಟುವಟಿಕೆಗಳು ಹೀಗಿರಬಹುದು:

* ನ್ಯಾಯಾಲಯದಲ್ಲಿ ನಡೆಯುವ ಕಲಾಪಗಳು ನಮ್ಮ ಜೀವನದ ಮೇಲೆ ಪರಿಣಾಮ ಬೀರುವ ಕಾರಣದಿಂದ ಉಚ್ಚ ನ್ಯಾಯಾಲಯದಲ್ಲಿ ಇಂಪ್ಲೀಡ್ ಮಾಡಿಕೊಳ್ಳುವ ಬಗ್ಗೆ ಆಸಕ್ತರು ಚಿಂತನೆ ಮಾಡಬಹುದು.
* ಕಾವೇರಿ ನದಿಯ ನೀರನ್ನು ಯಾವ ಯಾವ ರಾಜ್ಯಗಳು ಎಷ್ಟೆಷ್ಟು ಪ್ರಮಾಣಗಳಲ್ಲಿ ಹಂಚಿಕೊಳ್ಳಬೇಕು ಎಂಬುದರ ಬಗ್ಗೆ ಅರಿವು ಮೂಡಿಸಿಕೊಳ್ಳುವುದು
* ಕರ್ನಾಟಕ ಸರ್ಕಾರ ಹಾಗೂ ತಮಿಳು ನಾಡುಗಳ ನಡುವೆ ಈ ವರೆಗೆ ನಡೆದಿರುವ ವ್ಯಾಜ್ಯಗಳ ಸಂಖ್ಯೆ ಹಾಗೂ ಸಾರಾಂಶದ ಬಗ್ಗೆ ತಿಳಿದುಕೊಳ್ಳುವುದು
* ಕರ್ನಾಟಕ ಸರ್ಕಾರ ಹಾಗೂ ತಮಿಳು ನಾಡು ರಾಜ್ಯಗಳಲ್ಲಿ ಪ್ರತಿ ವರ್ಷ ಲಭ್ಯವಾಗುವ ನೀರಿನ ಪ್ರಮಾಣ ಹಾಗೂ ಬಳಕೆ ವಿವರಗಳನ್ನು ತಿಳಿದುಕೊಳ್ಳುವುದು
* ಕರ್ನಾಟಕ ಸರ್ಕಾರ ಹಾಗೂ ತಮಿಳು ನಾಡು ರಾಜ್ಯಗಳು ನೀಡುತ್ತಿರುವ ಹೇಳಿಕೆಗಳು ಸತ್ಯವೇ ಅಲ್ಲವೇ ಎಂದು ತಿಳಿಯಲು ಆರ್ ಟಿಐ ಅರ್ಜಿಗಳನ್ನು ಸಲ್ಲಿಸುವುದು

ಹೀಗೆ ಲಭ್ಯವಾದ ಮಾಹಿತಿಗಳನ್ನು ಶಕ್ತ್ಯಾನುಸಾರ ಸಾಮಾಜಿಕ ಜಾಲತಾಣಗಳಲ್ಲಿ ಪ್ರಕಟಿಸಿದಲ್ಲಿ ಇನ್ನೂ ಹೆಚ್ಚು ಜನರಿಗೆ ಆಸಕ್ತಿ ಮೂಡಿಸಬಹುದಾಗಿರುತ್ತದೆ. ಹೀಗೆ ಅರಿವು ಮೂಡಿಸಿಕೊಂಡ ಜನರ ಸಂಖ್ಯೆ ಹೆಚ್ಚಾದಷ್ಟು ಈ ಸಮಸ್ಯೆಯನ್ನು ಬಗೆ ಹರಿಸಲು ಬಹಳಷ್ಟು ಇತರ ಮಾರ್ಗಗಳು ಕಾಣುವ ಸಾಧ್ಯತೆಗಳು ಹೆಚ್ಚಾಗುತ್ತವೆ. ಜೊತೆ–ಗೆ ಕ್ರಮೇಣ ಈ ಮಾಹಿತಿಗಳು ಲಭ್ಯವಾದಂತೆ ಜನರಿಗೆ ಭಾವನೆಗಳನ್ನು ಹೊರಗೆಡಹಲು ಸಮಯ ಹಾಗೂ ಸೂಕ್ತ ಮಾರ್ಗಗಳು ಲಭ್ಯವಾಗುವ ನಿರೀಕ್ಷೆ ಇಟ್ಟುಕೊಳ್ಳಬಹುದು.

ಇದೇ ದಿಕ್ಕಿನಲ್ಲಿ ಮುಂದುವರೆದಾಗ ಬಹಳಷ್ಟು ಕನ್ನಡ ಸಾಹಿತಿಗಳು ಕಾವೇರಿ ವಿವಾದದ ಸಮಯದಲ್ಲಿ ಹಿಂಜರಿಯದೇ ಮುನ್ನುಗ್ಗಿ ಚಳುವಳಿಗಳಲ್ಲಿ ಭಾಗವಹಿಸುತ್ತಿರುತ್ತಾರೆ. ಆದರೂ ಅವರ ಭಾಗವಹಿಸುವಿಕೆ ಸರ್ಕಾರದ ಮೇಲೆ ಒತ್ತಡ ಹಾಕಲು ಮಾತ್ರ ಪ್ರಯೋಜನವಾಗುತ್ತದೆ. ಅಲ್ಲಿಂದ ಮುಂದೇನು ಎಂದರೆ ಎಲ್ಲರ ಜೊತೆಗೆ ರಸ್ತೆಗೆ ಇಳಿದು ಹೋರಾಟ ನಡೆಸಬೇಕೆಂಬ ಮಾರ್ಗ ಮಾತ್ರ ಉಳಿಯುತ್ತದೆ. ಈ ಬಗ್ಗೆ ನಾವು ಈ ಕಾವೇರಿ ನದಿಯ ವಿವಾದದ ಬಗ್ಗೆಯ ಇತಿಹಾಸವನ್ನು ಅವಲೋಕಿಸಿದಾಗ ಚಿತ್ರ ಈ ರೀತಿ ಕಾಣಿಸುತ್ತದೆ:

1. ಕಾವೇರಿ ವಿವಾದ ಪ್ರಾರಂಭವಾದದ್ದು 1892ರಲ್ಲಿ
2. ಅಂದಿನಿಂದಲೂ ಹಲವಾರು ರೀತಿಯ ನ್ಯಾಯಾಲಯಗಳಲ್ಲಿ ಹೊಡೆದಾಡಿದರೂ ಕರ್ನಾಟಕಕ್ಕೆ ಅನ್ಯಾಯವಾಗುತ್ತಲೇ ಬಂದಿದೆ. ಹೀಗಾಗಿ ಭವಿಷ್ಯದಲ್ಲಿಯೂ ಯಾವುದೇ ನ್ಯಾಯಾಲಯದಲ್ಲಿ ನಮಗೆ ಸಮಾಧಾನವಾಗುವಂತಹ ನ್ಯಾಯ ದೊರಕುತ್ತದೆ ಎಂಬ ನಂಬಿಕೆ ಇಟ್ಟುಕೊಳ್ಳಲು ಸಾಧ್ಯವಿಲ್ಲ.
3. ಬ್ರಿಟಿಶ್ ಸರ್ಕಾರವಿದ್ದಾಗ ಪ್ರಾರಂಭಗೊಂಡ ಸಮಸ್ಯೆ ಹಲವು

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

ಕಳ್ಳು: ಕಳ್ ಎಂಬುದು ಇದರ ಮೂಲ ರೂಪ; ಇದೊಂದು ನಾಮಪದ. ಹೆಂಡ ಎಂಬುದು ಇದರರ್ಥ. ಈ ಶಬ್ದ ತಮಿಳಿನಲ್ಲಿ ಕಳ್ ಎಂದೂ, ತೆಲುಗಿನಲ್ಲಿ ಕಲ್ಲು ಎಂದೂ, ಮಲಯಾಳಂನಲ್ಲಿ ಕಳ್, ಕಳ್ಳು ಎಂದೂ, ತುಳುವಿನಲ್ಲಿ ಕಲಿ ಎಂದೂ ಬಳಕೆಯಲ್ಲಿದೆ.ನಾಗವರ್ಮನ 'ಅಭಿಧಾನ ವಸ್ತುಕೋಶ'ವೆಂಬ ನಿಘಂಟಿನಲ್ಲಿ "ಮದಿರೆ ಸುರೆ ಕಳ್ಳುಂ" ಎಂಬ ಸಮಾನಾರ್ಥಕಗಳನ್ನು ಕೊಡಲಾಗಿದೆ.ಕಳ್ಗುಡಿ ಎಂದರೆ ಹೆಂಡ ಕುಡಿ ಎಂದು."ಕಳ್ಗುಡಿದವರಂದಂ ಇಂತು ಸಿರಿ ಸಾರ್ತರೆ ಸಾರ್ವುದು" ಎಂಬುದು 'ಪಂಪಭಾರತ'ದ ಪ್ರಯೋಗ. ಹೆಂಡ ಕುಡಿಯುವವನು 'ಕಳ್ಕುಣಿ' ('ಖಳನುಂ ಕಳ್ಕುಣಿಯುಂ ಘುಳುಮ್ಮನಿಟಿಗುಂ ಶ್ವಭ್ರಾಂತಮಂ ತಾಪಿನಂ' – ಪಂಪನ 'ಆದಿಪುರಾಣ'), ಕಳ್ಗುಡಿಹ ('ಶುಂಡಾಪನಂ ಕಳ್ಗುಡಿಹ' – 'ಅಭಿಧಾನ ವಸ್ತುಕೋಶ') ಅಥವಾ 'ಕಳ್ಗುಡುಕಿ' ('ಕಳ್ಗುಡಿಕಿಗಳುಂ ನಿರ್ದಯರುಂ ಮಾಡದ ಪಾಪಮಿಲ್ಲ'  ನಯಸೇನನ 'ಧರ್ಮಾಮೃತ'). ಹೆಂಡ ಕುಡಿಯುವ ಹವ್ಯಾಸವನ್ನು ಕೆಲವೆಡೆ 'ಕಳ್ಗುಡುಹಿತನ' ಎಂದು ಕರೆಯಲಾಗಿದೆ.ಕಳ್ಳನ್ನು ಮಾಡಿ ಮಾರುವವನನನ್ನು 'ಕಳ್ಳವಳ' ಎನ್ನುತ್ತಿದ್ದರು '(ಆ ಪೊಟಿಲ ಕಳ್ಳವಳನೊರ್ವಂ' – ಕರ್ಣಪಾರ್ಯನ 'ನೇಮಿನಾಥ ಪುರಾಣ').ಮತ್ತೊಂದು ಕಾವ್ಯದಲ್ಲಿ (ನೇಮಿನಾಥನ 'ಅರ್ಧನೇಮಿ ಪುರಾಣ') 'ಕಳ್ಳಸಿಗ' ಎಂದು ಕರೆಯಲಾಗಿದೆ.ಅಂಥ ಹೆಂಗಸನ್ನು 'ಕಳ್ಳವತಿ' ಎಂದು ಅದೇ ಕಾವ್ಯದಲ್ಲಿ ಕರೆದಿದೆ ('ಕೌಶಂಬಿಯ ಕಳ್ಳವತಿ ಮಂಡೋದರಿಯ ಮಗ'). ಹೆಂಡ ಮಾರುವವರ ಕೇರಿಯನ್ನು 'ಕಳ್ಳಸಿಗಗೇರಿ' ಎಂದು ಕರೆಯುತ್ತಿದ್ದರು ('ಕಳ್ಳಸಿಗಗೇರಿಯೊಳಗಣ ಕಳ್ಳೆಲ್ಲಮಮಂ ಎಱೆದು ತರಿಸಿ' – ನಯಸೇನನ 'ಧರ್ಮಾಮೃತ').

ಪಂಪ ತನ್ನ 'ಪಂಭಾರತ'ದಲ್ಲಿ "ಮುನೂಱಱುವತ್ತು ಜಾತಿ ಕಳ್ಗಳಂ" ಎನ್ನುತ್ತಾನೆ. ಬಾಹುಬಲಿ ಎಂಬ ಕವಿಯು ತನ್ನ 'ಧರ್ಮನಾಥಪುರಾಣ'ದಲ್ಲಿ "ಸಿರಿ ಸಿಂಬಿ ತಂಪುಗಂ ಬಬ್ಬರಿ ಗಂಗಾಸಾಗರಂ ಸುರಾಳಂ ಸೋಮಂ ವರವಾಣಿ ಮಾಳವೋದರಿ ಮರವಟ್ಟಿಗೆಯೆಂಬ ಕೆಲವು ಪೆಸರಿನ ಕಳ್ಳಂ" ಉಲ್ಲೇಖಿಸುತ್ತಾನೆ. ಹೆಂಡದ ಮಾರಯ್ಯನೆಂಬೊಬ್ಬ ವಚನಕಾರನು ಹೆಂಡವಿಳಿಸುವ ರೂಪಕದ ಮೂಲಕವಾಗಿಯೇ ತನ್ನ ಆಧ್ಯಾತ್ಮಿಕ ಸಾಧನೆಯನ್ನು ವರ್ಣಿಸುತ್ಥಾನೆ.

ಕಾಂಚಾಣ: ಈ ಶಬ್ದ ಕಾಂಚನ ಎಂಬ ಸಂಸ್ಕೃತ ಶಬ್ದದ ಕನ್ನಡೀಕರಣಗೊಂಡ ರೂಪ ಅಥವಾ ತದ್ಭವ. ಚಿನ್ನ ಎಂಬುದು ಮೂಲಾರ್ಥ; ಆದರೆ ಹಳದಿ ಬಣ್ಣದ ಬಹು ವಸ್ತುಗಳಿಗೆ ಅನ್ವಯಿಸುವಂತೆ ಇದರ ಅರ್ಥ ವಿಸ್ತಾರಗೊಂಡಿದೆ: ಸಂಸ್ಕೃತದಲ್ಲಿಯೇ ಕಾಂಚನ ಎಂಬುದಕ್ಕೆ ಸಂಪಿಗೆ, ದತ್ತೂರಿ, ನಾಗಕೇಸರ, ಪುನ್ನಾಗ ಮುಂತಾದ ವಿವಿಧ ಮರಗಳು ಮತ್ತು ಹೂವು ಎಂಬರ್ಥ ಪ್ರಾಪ್ತವಾಗಿದೆ. ಚಿನ್ನದ ಡಾಬನ್ನು ಕಾಂಚೀ ಕಾಂಚೀಲತೆ, ಕಾಂಚೀಪಟ್ಟಿಕೆ, ಕಾಂಚೀದಾಮ ಮುಂತಾದ ಹೆಸರುಗಳಿಂದ ಕನ್ನಡ ಕಾವ್ಯಗಳೂ ಕರೆಯುತ್ತವೆ. ಸೀತಾರಾಮರನ್ನು ಆಕರ್ಷಿಸಲು ಮಾರೀಚನು ಬಂದುದು 'ಕಾಂಚನಮೃಗ'ದ ರೂಪದಲ್ಲಿ. ಕಾಂಚನವರ್ಣ ಎಂದರೆ ಚಿನ್ನದ ಬಣ್ಣ ಅಂದರೆ ಹಳದಿ.ಆ ಲೋಹದ ಆಕರ್ಷಣೆಯೇ ಅದರ ಬಣ್ಣವಾದ್ದರಿಂದ ಚಿನ್ನವನ್ನು 'ಸುವರ್ಣ' ಅಥವಾ ಸ್ವರ್ಣ ಎಂದು ಕರೆದರು.ಅತ್ಯಂತ ಶ್ರೇಷ್ಠವಾದ ಚಿನ್ನದ ಪರ್ವತವೆಂದು ಹೇಳಲಾದ ಮೇರುವನ್ನು ಕಾಂಚನಾದ್ರಿ ಎಂದೇ ಕಾವ್ಯಗಳು ಕರೆಯುತ್ತವೆ. ಹೊನ್ನಿನ ಬಣ್ಣದ ಬಾಳೆಯನ್ನು 'ಮಲ್ಲಿನಾಥಪುರಾಣ'ವೆಂಬ ನಾಗಚಂದ್ರನ ಕಾವ್ಯದಲ್ಲಿ ಕಾಂಚನಕದಳೀ ಎಂದು ಕರೆಯಲಾಗಿದೆ.

ಕಾಂಚಾಣ ಎಂಬುದು ಕನ್ನಡದಲ್ಲಿ ದುಡ್ಡು ಎಂಬರ್ಥದಲ್ಲಿ ಬಳಕೆಯಾಗಿದೆ.ಕನ್ನಡ ನಾಡಿನಲ್ಲಿ ಹಿಂದೆ ಚಿನ್ನದ ನಾಣ್ಯಗಳು ಚಲಾವಣೆಯಲ್ಲಿದ್ದುವು; ಗದ್ಯಾಣ, ಪೊನ್, ವರಹ ಮುಂತಾದ ಹೆಸರಿನಲ್ಲಿ ಬಕೆಯಲ್ಲಿದ್ದುವು; ಹೀಗಾಗಿ ಆ ಶಬ್ದಕ್ಕೆ ದುಡ್ಡು ಎಂಬ ಅರ್ಥ ಬಂದಿದೆ.ಇದು ತದ್ಭವ ಶಬ್ದವಾದರೂ ಅದನ್ನು ಸಂಸ್ಕೃತ ಶಬ್ದವೆಂಬಂತೆ "ಕಾಂಚಾಣಂ ಕಾರ್ಯಸಿದ್ಧಿಃ" ಎಂಬ ವಾಕ್ಯವನ್ನು ಮಾಡಿಕೊಂಡು, ದುಡ್ಡು ಕೊಟ್ಟರೆ (ಲಂಚವಿತ್ತರೆ) ಏನು ಬೇಕಾದರೂ ಆಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಮಾಡಲು ಕೆಲವರು ತಮಾಷೆಯಾಗಿ ಹೇಳುತ್ತಾರೆ.ಹಣಕ್ಕೆ ಅರ್ಥಾತ್ ಹಣವಂತರಿಗೆ ಭಾವನೆಗಳಿಲ್ಲ ಎಂದು ಸೂಚಿಸಲು ಕುರುಡು ಕಾಂಚಾಣ ಎಂಬ 'ನುಡಿಗಟ್ಟು' ಬಂದಿದೆ.ಬೇಂದ್ರೆಯವರ ತುಂಬ ಪ್ರಸಿದ್ಧವಾದ ಪದ್ಯದ ಹೆಸರೇ 'ಕುರುಡು ಕಾಂಚಾಣ'.ನಾನಾ ನೆಲೆಗಳಲ್ಲಿ ವ್ಯಕ್ತವಾಗುವ ಹಣವಂತರ ಸೊಕ್ಕನ್ನು ಕಂಡು ಕೆರಳುವ ಕವಿಯು "ಹ್ಯಾಂಗಾರ ಕುಣಿಕುಣಿದು ಮುಂಗಾಟ ನಡೆದಾಗ ಅಂಗಾತ ಬಿತ್ತೋ ಹೆಗಲೊಳಗೆತ್ತೋ" ಎಂದು ಕರೆ ಕೊಡುತ್ತಾರೆ.ಕಾಂಚಾಣ ಪದದಲ್ಲಿನ ಣ ಮತ್ತು ಲೋಹದ ನಾಣ್ಯಗಳು ಬಿದ್ದಾಗ ಟಣ್ ಎಂದು ಸದ್ದುಮಾಡುವುದರಿಂದ ಝಣಝಣ ಎಂಬ ಅನುಕರಣಪದವೂ ಹಣವನ್ನು ಸೂಚಿಸುತ್ತದೆ.

=====

ವಿಧದ ಹಲವು ಪಕ್ಷಗಳ ಆಡಳಿತಗಳಲ್ಲಿ ಕಳೆದ 124 ವರ್ಷಗಳಲ್ಲಿ ಬಗೆ ಹರಿದಿರುವುದಿಲ್ಲ. ಅಂದರೆ ಈ ಸಮಸ್ಯೆಯನ್ನು ಬಗೆಹರಿಸಲು ಕೇಂದ್ರ ಸರ್ಕಾರಕ್ಕಾಗಲೀ ರಾಜ್ಯ ಸರ್ಕಾರಗಳಿಗಾಗಲೀ ಸಾಧ್ಯವಿಲ್ಲ ಎಂಬುದು ನಿಚ್ಚಳವಾಗಿ ಕಾಣುತ್ತಿರುವ ಸತ್ಯ.

4. ಹಾಗೆಯೇ ಯಾವುದೇ ರಾಷ್ಟ್ರೀಯ ಮಟ್ಟದ ರಾಜಕೀಯ ಪಕ್ಷಕ್ಕೆ ಈ ಸಮಸ್ಯೆಯನ್ನು ಬಗೆ ಹರಿಸುವಲ್ಲಿ ಆಸಕ್ತಿಯಾಗಲೀ ವ್ಯವಧಾನವಾಗಲಿ ಇರಲಾರದು.
5. ಹಾಗೆಯೇ ಆಗೊಮ್ಮೆ ಈಗೊಮ್ಮೆ ಒಂದೆರೆಡು ದಿನಗಳ ಕಾಲ ರಸ್ತೆಗಿಳಿದು ಬಂದ್ ಇತ್ಯಾದಿಗಳನ್ನು ಆಚರಿಸಿದರೂ ಈ ಸಮಸ್ಯೆ ಬಗೆಹರಿಯುತ್ತದೆ ಎಂದು ನಂಬಲು ಸಾಧ್ಯವಿಲ್ಲ.

ಇಂತಹ ಸನ್ನಿವೇಶದಲ್ಲಿ ಬೇರೆ ಯಾವ ಮಾರ್ಗದಲ್ಲಿ ನಾವು ಸಾಗಬೇಕು ಎನ್ನುವ ಪ್ರಶ್ನೆ ಏಳುತ್ತದೆ. ಕಾವೇರಿ ನದಿಯು ನಾಲ್ಕು ರಾಜ್ಯಗಳಿಗೆ ಜಲ ಭಾಗ್ಯ ನೀಡಿ ಹಂಚಿಕೊಂಡು ಬಾಳಬೇಕು ಎನ್ನುವುದನ್ನು ತಿಳಿಸಿಕೊಡುತ್ತಿದೆ. ನದಿ ನೀಡುತ್ತಿರುವ ಸಂದೇಶವನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ.

ಕಾವೇರಿ ನದಿ ನೀರು ನಮಗೆಲ್ಲ ಜೀವ ಜಲ. ದಕ್ಷಿಣ ಕರ್ನಾಟಕಕ್ಕೆ ಹಾಗೂ ತಮಿಳುನಾಡಿನ ಕೆಲ ಭಾಗಗಳಿಗೆ ಕಾವೇರಿ ನೀರೇ ಜೀವಾಳ. ಹೀಗಾಗಿ ಸರ್ಕಾರಗಳು ಏನೇ ಹೇಳಲೀ ಏನೇ ಮಾಡಲಿ ಎರಡೂ ರಾಜ್ಯಗಳ ಜನರಿಗೆ ಕಾವೇರಿ ನದಿ ನೀರು ಅತ್ಯಗತ್ಯ. ಇಷ್ಟಿದ್ದರೂ ಕಾವೇರಿ ನೀರು ಜನಗಳ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುವ ಹಿನ್ನಲೆಯನ್ನು ಬಿಂಬಿಸುವ ಹೆಚ್ಚು ಸಾಹಿತ್ಯ ನಿರ್ಮಾಣವಾಗಿರುವುದಿಲ್ಲ. ಈ ದಿಕ್ಕಿನಲ್ಲಿ ನಮ್ಮ ವಿದ್ವಾಂಸರು, ಸಾಹಿತಿಗಳು ಹಾಗೂ ಚಿಂತಕರು ಹೆಚ್ಚು ಗಮನ ಹರಿಸಿ ಭಾರತೀಯ ಸಂವಿಧಾನದ ಅಡಿಯಲ್ಲಿ ನಮಗೆಲ್ಲರಿಗೂ ಲಭ್ಯವಿರುವ, ಭಾರತದ ಯಾವುದೇ ಸ್ಥಳದಲ್ಲಿ ವಾಸಿಸುವ ಹಕ್ಕನ್ನು ಭಾವೋದ್ವೇಗಕ್ಕೆ ಒಳಗಾಗಿ ನಿರಾಕರಿಸಲು ಯಾರಿಗೂ ಅವಕಾಶವಿಲ್ಲ ಎಂಬುದನ್ನು ಮನಗಂಡು ನಾವೆಲ್ಲರೂ ಸಮಾಧಾನ ಚಿತ್ತದಿಂದ ದುರಾಸೆಗೆ ಒಳಗಾಗದೆ ಹಂಚಿಕೊಂಡು ಬಾಳುವಂತೆ ಸಂದೇಶಗಳನ್ನು ಬೀರುವ ಕಥೆ, ಕಾದಂಬರಿ, ನಾಟಕ, ಸಿನಿಮಾ, ಕವನ, ಪ್ರಬಂಧಗಳ ಮೂಲಕ ಜನರಿಗೆ ಕಾವೇರಿ ನೀರಿನ ಮಹತ್ವವನ್ನು ಮನೋಜ್ಞವಾಗಿ ಚಿತ್ರಿಸಿ ಜನರ ದನಿ ಹಾಗೂ ಕಾವೇರಿ ನದಿ ನೀರಿನ ಬಗ್ಗೆ ಕನ್ನಡ ಹಾಗೂ ತಮಿಳು ಭಾಷಿಕರಲ್ಲಿ ಸಂವೇದನೆಗಳನ್ನು ಉಂಟು ಮಾಡಿದಲ್ಲಿ ಶಾಂತ ರೀತಿಯಲ್ಲಿ ಪರಿಹಾರ ಲಭ್ಯವಾಗುವ ಸಾಧ್ಯತೆಗಳು ಹೆಚ್ಚಿರುತ್ತವೆ. ಎರಡೂ ರಾಜ್ಯಗಳ ಸಾಮಾನ್ಯ ಜನರು 124 ವರ್ಷಗಳಿಂದ ಅನುಭವಿಸುತ್ತಿರುವ ಕಷ್ಟಗಳಿಗೆ ಜನರೇ ಪರಿಹಾರವನ್ನು ಕಂಡುಕೊಳ್ಳಬೇಕಿದೆ. ಇತರ ಎಲ್ಲಾ ಮಾರ್ಗಗಳಲ್ಲಿ ಇದುವರೆಗೆ ಫಲಿತಾಂಶ ಬಾರದಿರುವ ಈ ಸನ್ನಿವೇಶದಲ್ಲಿ ಈ ಮಾರ್ಗದಲ್ಲಿಯೂ ಪ್ರಯತ್ನಿಸಿದಲ್ಲಿ ನಷ್ಟವೇನೂ ಇರುವುದಿಲ್ಲ. ಸದಾ ಹೊಸತನವನ್ನು ಹುಡುಕುತ್ತಿರುವ ಓದುಗರಿಗೆ ಕಾವೇರಿ ನದಿ ಬಗ್ಗೆಯ ಸಾಹಿತ್ಯ ರಚನೆ ಸ್ವಾಗತಾರ್ಹ ಬೆಳವಣಿಗೆಯಾಗಬಹುದು. ●

## ಶ್ರೀ ಎನ್.ಎಸ್.ಶ್ರೀಧರ ಮೂರ್ತಿ



(ಕೃತಿ ಚಿತ್ರ ಕಾರ್ಯಕ್ರಮ ಮಾಲೆಗೆ ಸಂಯೋಜಕರು) ಬಾಲ್ಯದಿಂದಲೂ ಪ್ರತಿಭಾವಂತರು ಎನ್ನಿಸಿಕೊಂಡ ಶ್ರೀ ಎನ್.ಎಸ್.ಶ್ರೀಧರ ಮೂರ್ತಿ ಬಿ.ಎ.ಪದವಿಯಲ್ಲಿ ಎಂಟನೇ ರ್‍ಯಾಂಕ್ ಮತ್ತು ಮಂಗಳೂರು ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಚಿನ್ನದ ಪದಕ ಮತ್ತು ರ್‍ಯಾಂಕ್‌ನೊಂದಿಗೆ ಸ್ನಾತಕೋತ್ತರ ಪದವಿಯನ್ನು ಪಡೆದವರು. ಉಪನ್ಯಾಸಕರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ ಅವರು ನಂತರ ಹಲವು ಕಾರ್ಪೋರೇಟ್ ಸಂಸ್ಥೆಗಳಲ್ಲಿ ಉನ್ನತ ಹುದ್ದೆಯನ್ನು ನಿರ್ವಹಿಸಿದವರು. ಮಲ್ಲಿಗೆ ಮಾಸ ಪತ್ರಿಕೆಯ ಮೂಲಕ ಪತ್ರಿಕೋದ್ಯಮಕ್ಕೆ ಬಂದ ಅವರು ಮಂಗಳ ವಾರ ಪತ್ರಿಕೆ ಸಂಪಾದಕರಾಗಿ, ವಿಜಯ ವಾಣಿ ದಿನ ಪತ್ರಿಕೆ ಪುರವಣಿ ಸಂಪಾದಕರಾಗಿ ಕೂಡ ಕಾರ್ಯ ನಿರ್ವಹಿಸಿದ್ದಾರೆ. ಈಗ ಮಾಧ್ಯಮ ಸಲಹೆಗಾರರಾಗಿ ಹಲವು ಪ್ರಮುಖ ಸಂಸ್ಥೆಗಳೊಂದಿಗೆ ಕಾರ್ಯ ನಿರ್ವಹಿಸುತ್ತಿದ್ದಾರೆ.ಕಳೆದ ಎರಡು ದಶಕದಿಂದ ಸಾಂಸ್ಕೃತಿಕ ಪತ್ರಿಕೋದ್ಯಮವನ್ನು ಉಳಿಸುವಲ್ಲಿ ವಿವಿಧ ಪತ್ರಿಕೆಗಳ ಮೂಲಕ ಶ್ರಮಿಸುತ್ತಿದ್ದಾರೆ. ಚಲನಚಿತ್ರ ಇತಿಹಾಸದ ಕುರಿತು ಆಳವಾದ ಅಧ್ಯಯನ ನಡೆಸಿರುವ ಇವರು ಸಾಹಿತ್ಯ ಮತ್ತು ಅಧ್ಯಾತ್ಮ ಕ್ಷೇತ್ರದಲ್ಲಿಯೂ ಕೆಲಸ ಮಾಡಿದ್ದಾರೆ. "ಕನ್ನಡ ಚಿತ್ರಗೀತೆಗಳ ಚಾರಿತ್ರಿಕ ಅಧ್ಯಯನ" ಅವರ ಸಂಶೋಧನಾ ಕೃತಿ. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಅವರ ಮೂರು ಸಾವಿರಕ್ಕೂ ಹೆಚ್ಚು ಲೇಖನಗಳು ಪ್ರಕಟವಾಗಿದ್ದು ಕಥೆ, ಕಾದಂಬರಿ, ವಿಮರ್ಶೆ, ಸಂಶೋಧನೆ ಹೀಗೆ ವಿವಿಧ ಪ್ರಕಾರಗಳಲ್ಲಿ ಮೂವತ್ತೇಳು ಕೃತಿಗಳು ಅಚ್ಚಾಗಿವೆ. ವಿವಿಧ ವಾಹಿನಿಗಳ ಮೂಲಕ, ಬಾನುಲಿ ನಿಲಯಗಳ ಮೂಲಕ ಚಿತ್ರಗೀತೆಗಳನ್ನು ಕುರಿತು ಹಲವು ಜನಪ್ರಿಯ ಕಾರ್ಯಕ್ರಮಗಳನ್ನು ರೂಪಿಸಿರುವ ಅವರು ಕನ್ನಡ ಚಲನಚಿತ್ರರಂಗದ ಕುರಿತ ಹಲವು ಉದ್ಗ್ರಂಥಗಳ ಸಂಪಾದಕ ಮಂಡಳಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ನೂರಕ್ಕೂ ಹೆಚ್ಚು ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡಿಸಿರುವ ಇವರಿಗೆ ಆರ್.ಎನ್.ಆರ್ ಪುರಸ್ಕಾರ, ಸುವರ್ಣ ಕರ್ನಾಟಕ ಪುರಸ್ಕಾರಗಳೂ ಸೇರಿದಂತೆ ಹಲವು ಗೌರವಗಳು ಲಭಿಸಿವೆ.

### ೨೦೧೬ ಸೆಪ್ಟೆಂಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಓಲೆಗರಿ ಮತ್ತು ತಾಳೆಗರಿಗಳ ಕಾರ್ಯ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೬ರ ಸೆಪ್ಟಂಬರ್ ತಿಂಗಳಿನಲ್ಲಿ ೧೦ಗ್ರಂಥಗಳ ಶುಷ್ಕ ಶುದ್ದೀಕರಣ, ೪೨ ಗ್ರಂಥಗಳಿಗೆ ತೈಲ/ ಮಸಿ ಲೇಪನ ಕಾರ್ಯ, ೮೫ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೮೫ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೮೫ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೮ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಎ.ಪಿ.ಎಸ್. ಪದವಿ ಕಾಲೇಜಿನ ವಿದ್ಯಾರ್ಥಿಗಳಾದ ರಜನಿ, ಉಮಾ, ಮಧು ಮತ್ತು ಲಕ್ಷ್ಮೀ ಅವರುಗಳು ಹಸ್ತಪ್ರತಿ ಸಂರಕ್ಷಣಾ ಮತ್ತು ಡಿಜಿಟಲೀಕರಣದ ಕಾರ್ಯದಲ್ಲಿ ಭಾಗವಹಿಸಿ ಕೆಲವು ಗ್ರಂಥಗಳ ಸಂರಕ್ಷಣೆಗೆ ಕಾರಣರಾಗಿದ್ದಾರೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of Posting :30-09-2016**

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

**(ಕರ್ನಾಟಕ ಸಾಹಿತ್ಯಅಕಾಡೆಮಿಯ ಸಹಕಾರದೊಂದಿಗೆ)**

ಅಕ್ಟೋಬರ್ 3 ಹಾಗೂ 4, 2016ರಂದು ನಡೆಸುವ

ಪದವಿ ತರಗತಿಗಳ ಕನ್ನಡ ಬೋಧನೆಯ ವಿವಿಧ ಮಗ್ಗುಲುಗಳು

**(ಪದವಿ ಮಟ್ಟದ ಕನ್ನಡ ಉಪನ್ಯಾಸಕರಿಗಾಗಿ ಒಂದು ಶಿಬಿರ)**

**ಅಕ್ಟೋಬರ್ 3, 2016: ಸೋಮವಾರ**

* ಉದ್ಘಾಟನಾ ಸಮಾರಂಭ : ಬೆಳಿಗ್ಗೆ 10–00ರಿಂದ ಬೆಳಿಗ್ಗೆ 11–30
  ಪ್ರೊ॥ ಮಾಲತಿ ಪಟ್ಟಣಶೆಟ್ಟಿ, ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ
* ಚಹಾ ವಿರಾಮ : 11–30– 11–45

* **ಮೊದಲ ಗೋಷ್ಠಿ : ಬೆಳಿಗ್ಗೆ 11–45ರಿಂದ ಮಧ್ಯಾಹ್ನ 1–15**
  'ಮೊದಲ ಭಾಷೆಯಾಗಿಕನ್ನಡ ಬೋಧನೆ– ಮಾತು– ಬರವಣಿಗೆಗಳ ನೆಲೆಗಳು'
  ಸಂಪನ್ಮೂಲ ವ್ಯಕ್ತಿಗಳಿಂದ ವಿವರಣೆ ಹಾಗೂ ಚರ್ಚೆ–**ಡಾ॥ ಎಚ್.ಎನ್. ಮುರಳೀಧರ**
* ಊಟದ ವಿರಾಮ ಮಧ್ಯಾಹ್ನ 1–15ರಿಂದ2–00

* **ಎರಡನೆಯ ಗೋಷ್ಠಿ : ಅಪರಾಹ್ನ 2–00ರಿಂದ ಸಂಜೆ 3–30**
  'ಮೊದಲ ಭಾಷೆಯ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯದ ಬೋಧನೆ– ಅನುಭವ ಮಾತಾಗುವ ಪರಿ'
  ಸಂಪನ್ಮೂಲ ವ್ಯಕ್ತಿಗಳಿಂದ ವಿವರಣೆ ಹಾಗೂ ಚರ್ಚೆ– **ಡಾ॥ ರಾಮಲಿಂಗಪ್ಪ ಬೇಗೂರು**
* ಚಹಾ ವಿರಾಮ: ಸಂಜೆ 3–30 ರಿಂದ 3–45

* **ಮೂರನೆಯ ಗೋಷ್ಠಿ – ಅಪರಾಹ್ನ 3–45 ರಿಂದ ಸಂಜೆ 5–15**
  'ಐಚ್ಛಿಕ ವಿಷಯವಾಗಿ ಕನ್ನಡ : ವಿವಿಧ ಸಾಹಿತ್ಯ ಪ್ರಕಾರಗಳ ಬೋಧನೆಯ ಸ್ವರೂಪ'–
  ಸಂಪನ್ಮೂಲ ವ್ಯಕ್ತಿಗಳಿಂದ ವಿವರಣೆ ಹಾಗೂ ಚರ್ಚೆ – **ಡಾ॥ ಎಸ್.ಎಲ್ ಮಂಜುನಾಥ್**

**ಅಕ್ಟೋಬರ್ 4: ಮಂಗಳವಾರ**

* **ನಾಲ್ಕನೆಯ ಗೋಷ್ಠಿ : ಬೆಳಿಗ್ಗೆ 10–00ರಿಂದ ಬೆಳಿಗ್ಗೆ 11–30**
  'ಐಚ್ಛಿಕಕನ್ನಡ ವಿದ್ಯಾರ್ಥಿಗಳಿಗೆ ಬೇಕಾದ ಹಳಗನ್ನಡ ಬೋಧನೆ'–
  ಸಂಪನ್ಮೂಲ ವ್ಯಕ್ತಿಗಳಿಂದ ವಿವರಣೆ ಹಾಗೂ ಚರ್ಚೆ– **ಪ್ರೊ॥ಬಿ.ಪಿ. ವೀರೇಂದ್ರಕುಮಾರ್**
* ಚಹಾ ವಿರಾಮ : ಮಧ್ಯಾಹ್ನ11–30ರಿಂದ11–45

* **ಐದನೆಯ ಗೋಷ್ಠಿ: ಬೆಳಿಗ್ಗೆ 11–45 ರಿಂದ ಮಧ್ಯಾಹ್ನ 1–15**
  ಐಚ್ಛಿಕಕನ್ನಡ ವಿದ್ಯಾರ್ಥಿಗಳಿಗೆ ಶಾಸ್ತ್ರ ವಿಷಯಗಳ ಬೋಧನೆ'
  ಸಂಪನ್ಮೂಲ ವ್ಯಕ್ತಿಗಳಿಂದ ವಿವರಣೆ ಹಾಗೂ ಚರ್ಚೆ– **ಡಾ॥ ಕೆ.ಆರ್.ಗಣೇಶ**
* ಊಟದ ವಿರಾಮ : ಮಧ್ಯಾಹ್ನ 1–15ರಿಂದ 2–00

* **ಆರನೆಯ ಗೋಷ್ಠಿ ಮಧ್ಯಾಹ್ನ 2–00ರಿಂದ 3–30**
  'ಕನ್ನಡ ಸಾಹಿತ್ಯ ಬೋಧನೆಯಲ್ಲಿತಂತ್ರಜ್ಞಾನದ ಅಳವಡಿಕೆ–
  ಸಂಪನ್ಮೂಲ ವ್ಯಕ್ತಿಗಳಿಂದ ವಿವರಣೆ ಹಾಗೂ ಚರ್ಚೆ– **ಡಾ॥ ಎನ್. ಆರ್. ಲಲಿತಾಂಬ**
* ಚಹಾ ವಿರಾಮ : ಮಧ್ಯಾಹ್ನ 3–30ರಿಂದ 3–45

* **ಸಮಾರೋಪ ಸಮಾರಂಭ : 3–45ರಿಂದ ಸಂಜೆ 5–15**
  **ಪ್ರೊ॥ ಎಸ್.ಜಿ. ಸಿದ್ಧರಾಮಯ್ಯ,** ಖ್ಯಾತ ಕವಿಗಳು ಹಾಗೂ ವಿದ್ವಾಂಸರು
  ಶಿಬಿರ ನಿರ್ದೇಶಕರು : **ಪ್ರೊ॥ ಕೆ.ಎಸ್. ಮಧುಸೂದನ್**

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..............................................................................

..............................................................................

..............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭